ಶ್ರೀ ವಿಜಯದಾಸಾರ್ಯ ವಿರಚಿತ ನೇತ್ರ ಸುಳಾದಿ
( ಶ್ರೀ ವೆಂಕಟೇಶ ಲೋಚನ ಸುಳಾದಿ )

ರಾಗ ಭೈರವಿ

–ಧ್ರುವತಾಳ–

ಚಂದ್ರಮಂಡಲ ಪೋಲುವ ಇಂದಿರಾ ಮೊಗವನು
ಚಂದದಿಂದಲಿ ಬಿಡದೆ ನಿಕ್ಷಿಸುವ ಲೋಚನ
ಮಂದಹಾಸ ಶೀತಳವಾಗಿ ಪಾದವನು
ಪೊಂದಿದ ಭಕ್ತರನ ನೋಡುವ ಲೋಚನ
ವಂದಿಸಿ ಕೊಂಡಾಡಿ ಒಂದೇ ಭಕುತಿಯಲ್ಲಿ ದೇವನ ನಂಬಲು
ನಂದದಿಂದಲಿ ಸುಧಾ ಬಿಂದುಗರೆವ ಲೋಚನ
ಅಂದು ಪ್ರಲ್ಹಾದಗೆ ಕಂಭದಿಂದಲಿ ವೊಲಿದು
ಬಂದು ಹೇರಳವಾಗಿ ಕಿಡಿ ತೋರಿದ ಲೋಚನ
ವೃಂದಾದೊಳಗೆ ಸಕಲ ವೃಕ್ಷಜಾತಿಗೆ ಮಿಗಲು
ಎಂದೆನಿಸುವ ತುಳಸಿ ಪೆತ್ತ ಲೋಚನ
ಕಂದರ್ಪಪಿತ ನಮ್ಮ ವಿಜಯವಿಠಲ ನಿನ್ನ
ದ್ವಂದ್ವಾನಂತ ಪೊಳೆವ ಸುಲೋಚನ ॥ ೧ ॥

– ಮಟ್ಟತಾಳ –

ಸರಸೀರುಹ ದಳ ಮರಿಸಿದ ಲೋಚನ
ಕರಿಯ ಮೇಲೆ ದಯಾ ಹರಿಸಿದ ಲೋಚನ
ಕುರು ಬಲದಾಯುಷ್ಯ ಹರಿಸಿದ ಲೋಚನ
ಅರುಣ ವರಣದ ರೇಖೆ ಸ್ಫುರಿತದ ಲೋಚನ
ಕರುಣಿ ಜಿತಾಮನ್ಯು ವಿಜಯವಿಠಲ ಸರ್ವ
ವರಣಾಶ್ರಮದಲ್ಲಿ ಭರಿತ ಲೋಚನ ॥ ೨ ॥

– ತ್ರಿವಿಡಿತಾಳ –

ಜಲನಿಧಿಯ ಮೇಲೆ ತಿರಹಿದ ಲೋಚನ
ಸುಲಲಿತವಾಗಿದ್ದ ಸುಂದರ ಲೋಚನ
ಜಲಜಾಪ್ತ ಶಶಿಯಂತೆ ಒಪ್ಪುವ ಲೋಚನ
ಕಳಂಕವಿಲ್ಲದ ನಿರ್ದೋಷ ಲೋಚನ
ಒಳಗೆ ಹೊರಗೆ ನೋಟ ತುಂಬಿದ ಲೋಚನ
ಸಲೆ ವಿಶಾಲವಾಗಿ ಮಿರಗುವ ಲೋಚನ
ಬಲುದೈವಾ ಸುಕೃತ ವಿಜಯವಿಠಲ ತಿಮ್ಮ
ಕೆಲಕಾಲ ಜಾಗರವಾಗಿದ್ದ ಲೋಚನ ॥ ೩ ॥

– ಅಟ್ಟತಾಳ –

ದಟ್ಟ ದಾರಿದ್ರನ್ನ ದೃಷ್ಟಿಯಿಂದಲಿ ನೋಡೆ
ಅಷ್ಟಭಾಗ್ಯವ ನೀವಾಭೀಷ್ಟದ ಲೋಚನ
ಕಷ್ಟವಾದರು ಮನ್ನಿಸಿದರು ನಿಮಿಷಕ್ಕೆ
ಶ್ರೇಷ್ಟನ್ನ ಮಾಡುವ ಸ್ವಾತಂತ್ರ ಲೋಚನ
ಸೃಷ್ಟಿಯೊಳಗೆ ಸಗರಕುಲ ಹೆಣಗಲು
ಸುಟ್ಟು ಕಳೆದ ಪರಾಕ್ರಮ ಲೋಚನ
ಶ್ರೇಷ್ಠನಾಮಾ ಸಿರಿ ವಿಜಯವಿಠಲರೇಯ
ಇಷ್ಟಾರ್ಥ ಪಾಲಿಪ ಶುಭಕರ ಲೋಚನ ॥ ೪ ॥

– ಆದಿತಾಳ –

ಸರ್ವ ಬೊಮ್ಮಾಂಡಗಳನ್ನು ಒಳಗಿಟ್ಟ ಲೋಚನ
ಗೀರ್ವಾಣ ಮುನಿಜನಕೆ ಮಹಿಮೆ ತೋರಿದ ಲೋಚನ
ಊರ್ವಿಯಾ ಪತಿಗಳನು ಪುಟ್ಟಿಸಿದ ಲೋಚನ
ಸರ್ವ ಪ್ರಾಣಿಗಳಿಗೆ ಸಾಕಲ್ಯವಾದ ಲೋಚನ
ಚಾರ್ವಾಕ ಖಳರನ್ನ ಜರೆವಂತ ಲೋಚನ
ಸರ್ವ ಕಾಲದಲ್ಲಿ ಎವೆ ಹಾಕದಿದ್ದ ಲೋಚನ
ಸರ್ವಶಾಸ್ತ್ರಾಭೃತ ವಿಜಯವಿಠಲರೇಯ
ಗೀರ್ವಾಣ ಭಜನೆಯರಿತು ಭಕ್ತರಿಗೀವ ಲೋಚನ ॥ ೫ ॥

**– ಜತೆ –**

ಗುರುತನುಜನಾ ನಡುಗಿಸಿಕೊಂಡ ಲೋಚನ
ಸಿರಿರಂಗ ಪ್ರಭುರಂಗ ವಿಜಯವಿಠಲನ ಲೋಚನ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥